## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1260 |
| ಮಾನ್ಯ ಸದಸ್ಯರ ಹೆಸರು | ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 22.09.2021 |
| ಉತ್ತರಿಸುವ ಸಚಿವರು | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ಗೃಹ ಮಂಡಳಿಯಿಂದ ಕಳೆದ ಮೂರು ವರ್ಷಗಳಲ್ಲಿ ಎಷ್ಟು ಜನರಿಗೆ ವಸತಿ ಹಂಚಿಕೆ ಮಾಡಲಾಗಿದೆ; | ಕರ್ನಾಟಕ ಗೃಹ ಮಂಡಳಿಯಿಂದ ಕಳೆದ ಮೂರು ವರ್ಷಗಳಲ್ಲಿ 7,722 ಜನರಿಗೆ ವಸತಿ ಹಂಚಿಕೆ ಮಾಡಲಾಗಿದೆ. |
| ಆ | ಗೃಹ ಮಂಡಳಿ ನಿರ್ಮಿಸಿರುವ ಮನೆಗಳು ಉತ್ತಮ ಗುಣಮಟ್ಟದಿಂದ ಕೂಡಿರುವುದಿಲ್ಲ ಎಂಬ ಭಾವನೆ ಜನರಲ್ಲಿದ್ದು, ಇದರಿಂದ ಈ ಮನೆಗಳನ್ನು ಖರೀದಿಸಲು ಜನ ಮುಂದೆ ಬರುತ್ತಿಲ್ಲವೆಂಬುದು ನಿಜವಲ್ಲವೆ; | ಇಲ್ಲ. ಕರ್ನಾಟಕ ಗೃಹ ಮಂಡಳಿ ವತಿಯಿಂದ ನಿರ್ಮಿಸಿರುವ ಮನೆಗಳು ಉತ್ತಮ ಗುಣಮಟ್ಟದಿಂದ ಕೂಡಿದ್ದು, ಸಾಕಷ್ಟು ಸಾರ್ವಜನಿಕರು ಮನೆ/ನಿವೇಶನಗಳನ್ನು ಹಂಚಿಕೆ ಮಾಡುವಂತೆ ಕೋರಿ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆ. |
| ಇ | ಉತ್ತಮ ಗುಣಮಟ್ಟದ ಮನೆಗಳನ್ನು ನಿರ್ಮಿಸಿ ಜನರಲ್ಲಿ ಆತ್ಮವಿಶ್ವಾಸವನ್ನು ತುಂಬಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? (ವಿವರ ನೀಡುವುದು) | ಕರ್ನಾಟಕ ಗೃಹ ಮಂಡಳಿಯು ಉತ್ತಮ ಗುಣಮಟ್ಟದ ಮನೆಗಳನ್ನು ನಿರ್ಮಿಸಲು ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>1. ವೃತ್ತಿಪರ ನುರಿತ ವಾಸ್ತುಶಿಲ್ಪಿಗಳಿಂದ ಯೋಜನಾ ನಕ್ಷೆ ಮತ್ತು ಯೋಜನಾ ವರದಿಗಳನ್ನು ಸಿದ್ಧಪಡಿಸಲಾಗುತ್ತಿದೆ.<br>2. ಪೂರ್ವಾರ್ಹತೆ ಪಡೆದ ಗುತ್ತಿಗೆದಾರರನ್ನು ನೇಮಿಸಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>3. ಕಾಮಗಾರಿಯ ಅನುಷ್ಠಾನ ಸಮಯದಲ್ಲಿ ಕಾಮಗಾರಿ ಗುಣಮಟ್ಟವನ್ನು ಕಾಯ್ದುಕೊಳ್ಳಲು ಯೋಜನಾ ಉಸ್ತುವಾರಿ ಸಂಸ್ಥೆಯನ್ನು ನೇಮಿಸಲಾಗುತ್ತಿದೆ. |

(ಸಂಖ್ಯೆ: ವಇ 123 ಕಗೃಮಂ 2021)

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು.